# ನಿಮಗೆ ಈ ಹತ್ತು ಸಾಮಾನ್ಯ ಮರಗಳ ಪರಿಚಯವಿದೆಯೇ?

–ಸ್ವಾತಿ ಸಿಧು

ನಿಮ್ಮ ಮನೆಯ ಅಕ್ಕ ಪಕ್ಕ, ನಿಮ್ಮ ಶಾಲೆಯ ಸುತ್ತಮುತ್ತ ಎಷ್ಟು ಮರಗಳನ್ನು ನೀವು ಗುರುತಿಸಬಹುದು?

ನಿಮಗೆ ಅವುಗಳ ಸಾಮಾನ್ಯ ಹೆಸರು ಗೊತ್ತೇ? ಅವು ಯಾವಾಗ ಹೂವು ಅಥವ ಹಣ್ಣು ಬಿಡುತ್ತವೆ ಎಂದು ನೀವು ಗಮನಿಸಿದ್ದೀರಾ? ಯಾವ ಪ್ರಾಣಿಗಳು ಅವುಗಳನ್ನು ಸಂದರ್ಶಿಸುತ್ತವೆ ಮತ್ತು ಯಾಕೆ? ನಾವು (ಮನುಷ್ಯರು) ಅವುಗಳನ್ನು ಏತಕ್ಕಾಗಿ ಉಪಯೋಗಿಸುತ್ತೇವೆ?

## ಪರಿವಿಡಿ

1. ಹಲಸು/ ಜಾಕ್‌ಫ್ರೂಟ್
2. ಹುಣಿಸೆ/ ಟಾಮಾರಿಂಡ್
3. ಹೊಂಗೆ / ಪೊಂಗ್ಯಾಮಿಯ
4. ಅರಳಿ/ಅಶ್ವತ್ಥ/ಪೀಪಲ್
5. ಬೇವು/ನೀಮ್
6. ಕಕ್ಕೆ/ ಇಂಡಿಯನ್ ಲ್ಯಾಬರ್ನಮ್
7. ಜಾಲಾರಿ/ಸಾಲ್
8. ಗೊಬ್ಬಳಿ/ಬಬೂಲ್
9. ತೇಗ/ಸಾಗುವಾನಿ/ಟೀಕ್
10. ಕಂಚುವಾಳ/ಬಸವನಪಾದ/ಪರ್ಪಲ್ ಬೊಹೀನಿಯಾ

## ಹಲಸು/ ಜಾಕ್‌ಫ್ರೂಟ್

| | |
|---|---|
| ವೈಜ್ಞಾನಿಕ ಹೆಸರು | : ಅರ್ಟೊಕಾರ್ಪಸ್ ಹೆಟೆರೋಫಿಲಸ್ (*Artocarpus heterophyllus*) |
| ಅನ್ಯ ಹೆಸರುಗಳು | : ಕಟಹಲ್ (ಹಿಂದಿ) |
| | : ಪಲಾ (ತಮಿಳು) |
| | : ಹಲಸು (ಕನ್ನಡ) |
| ಹೂ ಬಿಡುವ ಕಾಲ | : ಡಿಸೆಂಬರ್–ಮಾರ್ಚ್ |
| ಹಣ್ಣುಗಳು ದೊರೆಯುವುದು | : ಏಪ್ರಿಲ್–ಮೇ |

ಹಣ್ಣುಗಳನ್ನು ಹೊತ್ತ ಮರ
ಎಲೆಗಳು
ಗಂಡು ಪುಷ್ಪಗುಚ್ಛ/ಪುಷ್ಪಮಂಜರಿ
ಹೆಣ್ಣು ಪುಷ್ಪಗುಚ್ಛ/ಪುಷ್ಪಮಂಜರಿ

ನೀವು ಎಂದಾದರೂ ಹಲಸಿನ ಹೂವುಗಳನ್ನು ನೋಡಿದ್ದೀರಾ? ಈ ಮರದಲ್ಲಿ ಗಂಡು ಮತ್ತು ಹೆಣ್ಣು ಹೂವುಗಳೆರಡೂ ಇರುತ್ತವೆ ಮತ್ತು ಅವುಗಳು ಕೂಡ ಸಣ್ಣ ಹಣ್ಣುಗಳಂತೆಯೇ ಕಾಣುತ್ತವೆ. ಗಂಡು ಹೂವುಗಳ ಮೇಲ್ಮೈ ನಯವಾಗಿರುತ್ತದೆ ಮತ್ತು ಹೆಚ್ಚಾಗಿ ಎಳೆಯ ಕೊಂಬೆಗಳ ಮೇಲಿರುತ್ತವೆ. ಈ ಹೂವುಗಳ ಮೇಲೆ ಹಳದಿ ಬಣ್ಣದ ಪರಾಗವನ್ನೂ ಕಾಣಬಹುದು. ಹೆಣ್ಣು ಹೂವುಗಳ ಮೇಲ್ಮೈ ಉಬ್ಬು ತಗ್ಗುಗಳಿಂದ ಕೂಡಿದ್ದು, ಇವುಗಳು ಹೆಚ್ಚಾಗಿ ಮುಖ್ಯ ಕಾಂಡ ಅಥವ ಬಲಿತ / ದೊಡ್ಡ ಕೊಂಬೆಗಳಲ್ಲಿ ಕಂಡುಬರುತ್ತವೆ. ಹೆಣ್ಣು ಹೂವುಗಳು ಹಣ್ಣುಗಳಾಗಿ ಮಾರ್ಪಾಡಾದರೆ, ಗಂಡು ಹೂವುಗಳು ಕಪ್ಪು ಬಣ್ಣಕ್ಕೆ ತಿರುಗಿ ನಂತರ ಉದುರಿ ಹೋಗುತ್ತವೆ.

ಹುಣಿಸೆ / ಟಾಮಾರಿಂಡ್

| | |
|---|---|
| ವೈಜ್ಞಾನಿಕ ಹೆಸರು | : ಟಾಮಾರಿಂಡಸ್ ಇಂಡಿಕಾ (*Tamarindus indica*) |
| ಅನ್ಯ ಹೆಸರುಗಳು | : ಇಮ್ಲಿ (ಹಿಂದಿ) |
| | : ಪುಳಿಯಮರಮ್ (ತಮಿಳು) |
| | : ಹುಣಿಸೆ (ಕನ್ನಡ) |
| ಹೂ ಬಿಡುವ ಕಾಲ | : ಮೇ–ಜುಲೈ |
| ಹಣ್ಣುಗಳು ದೊರೆಯುವುದು | : ಡಿಸೆಂಬರ್–ಮಾರ್ಚ್ |

ಮರ
ಎಲೆಗಳು
ಹೂವುಗಳು

ಈ ಮರವು ವಿಶಾಲವಾಗಿದ್ದು ಗರಿಗಳಂತೆ ಪಸರಿಸಿದೆ. ಈ ಮರದ ಸಿಹಿ ಮತ್ತು ಹುಳಿ ಮಿಶ್ರಿತ ಹಣ್ಣುಗಳ ರುಚಿಯನ್ನು ನೀವು ಸವಿದಿರಬೇಕು. ಆದರೆ ಮೂಲತಃ ಇದು ಭಾರತದ ಮರವಲ್ಲವೆಂದು ನಿಮಗೆ ತಿಳಿದಿದೆಯೇ? ಅದು ಎಲ್ಲಿಂದ ಬಂದದ್ದು? ಕಂಡುಹಿಡಿಯಿರಿ!

ಹೊಂಗೆ / ಪೊಂಗ್ಯಾಮಿಯ

| | |
|---|---|
| ವೈಜ್ಞಾನಿಕ ಹೆಸರು | : ಪೊಂಗ್ಯಾಮಿಯಾ ಪಿನ್ನಾಟ (*Pongamia pinnata*) |
| ಅನ್ಯ ಹೆಸರುಗಳು | : ಕರಂಜ (ಹಿಂದಿ) |
| | : ಪೊಂಗ ಮರಮ್ (ತಮಿಳು) |
| | : ಹೊಂಗೆ ಮರ (ಕನ್ನಡ) |
| ಹೂ ಬಿಡುವ ಕಾಲ | : ಮಾರ್ಚ್–ಮೇ |
| ಹಣ್ಣುಗಳು ದೊರೆಯುವುದು | : ಏಪ್ರಿಲ್–ಜೂನ್ |

ಎಲೆಗಳು, ಮಚ್ಚೆಯಿರುವ ಎಲೆ
ಎಲೆಯ ಮೇಲಿರುವ ಗಾಲ್ಸ್
ಹೂವುಗಳು
ಬಲಿಯದ/ ಹಸಿ ಹಣ್ಣು
ಬಲಿತ/ ಒಣಗಿದ ಹಣ್ಣು

ಈ ಮರದ ಕಾಂಡ ಚಿಕ್ಕದಾಗಿದ್ದರೂ ಅದರ ಆವರಣ/ ಮೇಲ್ಪಾವಣಿ ಬಹಳ ದಟ್ಟವಾಗಿದೆ. ಮಾರ್ಚ್– ಏಪ್ರಿಲ್ ತಿಂಗಳುಗಳಲ್ಲಿ ಹೊಚ್ಚ ಹೊಸ ಎಲೆಗಳು ಚಿಗುರುತ್ತಿದ್ದಂತೆಯೇ ಕಂಡುಬರುವ ಹೂವುಗಳ ನೋಟ ಎಲ್ಲರ ಗಮನವನ್ನೂ ಸೆಳೆಯುತ್ತದೆ. ಕೆಲವೊಮ್ಮೆ ಹಳೆಯ ದೊಡ್ಡ ಎಲೆಗಳ ಮೇಲೆ ಕಂದು ಅಥವ ಬಿಳಿಯ ಬಣ್ಣದ ಮಚ್ಚೆಗಳು ಮೂಡಿರುವದನ್ನು ನೀವು ಗಮನಿಸಿದ್ದೀರ? ಜೊತೆಗೆ ಬಿಳಿಯ ಹುಳುಗಳಂತಹ ಗುರುತು ಅಥವ ವಿರೂಪಗೊಂಡಿರುವಂತಹ ಲಕ್ಷಣಗಳನ್ನು ಕಂಡಿರುವಿರಾ? ಕೆಲವು ಶಿಲೀಂಧ್ರಗಳ ಸೋಂಕು ಎಲೆಗಳಲ್ಲಿ ಈ ರೀತಿಯ ಮಚ್ಚೆಗಳನ್ನು ಮೂಡಿಸಿ ಅದಕ್ಕೆ ಹಾನಿಯುಂಟುಮಾಡಬಹುದು ಅಥವ ಎಲೆ ಕೊರಕದಂತಹ ಕೆಲವು ಕೀಟಗಳು ಎಲೆಗಳ ಕೆಳಗೆ ರಂಧ್ರವನ್ನು ಕೊರೆಯಬಹುದು ಅಥವ ಎಲೆಗಳಲ್ಲಿ ಗಾಲ್ಸ್‌ಗಳನ್ನುಂಟುಮಾಡಬಹುದು.

ಅರಳಿ /ಪೀಪಲ್

ಮರ
ಹೊಚ್ಚ ಹೊಸ ಎಲೆಗಳು
ಹಣ್ಣು
ಬಲಿತ ಎಲೆಗಳು

| | |
|---|---|
| ವೈಜ್ಞಾನಿಕ ಹೆಸರು | : ಫೈಕಸ್ ರೆಲಿಜಿಯೋಸ (*Ficus religiosa*) |
| ಅನ್ಯ ಹೆಸರುಗಳು | : ಪೀಪಲ್ (ಹಿಂದಿ) |
| | : ಅರಸು (ತಮಿಳು) |
| | : ಅರಳಿ (ಕನ್ನಡ) |
| ಹೂ ಬಿಡುವ ಕಾಲ | : ಏಪ್ರಿಲ್–ಮೇ |
| ಹಣ್ಣುಗಳು ದೊರೆಯುವುದು | : ಅಕ್ಟೋಬರ್–ನವೆಂಬರ್ |

ಈ ಮರದ ಹೂವುಗಳನ್ನು ನೀವು ನೋಡಿದ್ದೀರಾ? ಅಂಜೂರವನ್ನೇ ಹೋಲುವ ಹಸಿರು ಬಣ್ಣದ ಹಣ್ಣನ್ನು ನೀವು ತೆಗೆದು ನೋಡಿದರೆ ಅದರಲ್ಲಿ ನೂರಾರು ಹೂವುಗಳನ್ನು ಕಾಣಬಹುದು. ಹಣ್ಣನ್ನು ಕೊರೆದು ಒಳಗಡೆ ನುಸುಳುವ ಸಣ್ಣ ಕಣಜ ಕೀಟಗಳು ಈ ಹೂವುಗಳಿಗೆ ಪರಾಗಸ್ಪರ್ಷವನ್ನು ಮಾಡುತ್ತವೆ. ಒಳಗಡೆ ಸೇರಿ, ಹೂವುಗಳಿಗೆ ಪರಾಗಸ್ಪರ್ಷ ನೆರವೇರಿಸಿ, ನಂತರ ಮೊಟ್ಟೆಗಳನ್ನು ಇಡುತ್ತವೆ. ಚೆನ್ನಾಗಿ ಮಾಗಿದ ಕೆಂಪು ಬಣ್ಣದ ಹಣ್ಣನ್ನು ತೆಗೆದುನೋಡಿದರೆ ಅದರಲ್ಲಿ ಎಷ್ಟು ಕೀಟಗಳಿವೆ ಎಂದು ನಿಮಗೆ ತಿಳಿಯುತ್ತದೆ.

ಬೇವು / ನೀಮ್

| | |
|---|---|
| ವೈಜ್ಞಾನಿಕ ಹೆಸರು | :ಅಝಾಡಿರಕ್ಟಾ ಇಂಡಿಕಾ (*Azadirachta indica*) |
| ಅನ್ಯ ಹೆಸರುಗಳು | :ನೀಮ್ (ಹಿಂದಿ) |
| | :ವೆಪ್ಪ ಮರಮ್ (ತಮಿಳು) |
| | :ಕಿರುಬೇವು (ಕನ್ನಡ) |
| ಹೂ ಬಿಡುವ ಕಾಲ | :ಏಪ್ರಿಲ್ |
| ಹಣ್ಣುಗಳು ದೊರೆಯುವುದು | :ಮೇ–ಜೂನ್ |

ಮರ
ಎಲೆಗಳು
ಕಾಯಿ ಮತ್ತು ಮಾಗಿದ ಹಣ್ಣುಗಳು
ಹೂವುಗಳು

ಕಕ್ಕೆ/ ಇಂಡಿಯನ್ ಲ್ಯಾಬರ್ನಮ್

ವೈಜ್ಞಾನಿಕ ಹೆಸರು : ಕ್ಯಾಸಿಯಾ ಫಿಸ್ಟುಲ (*Cassia fistula*)
ಅನ್ಯ ಹೆಸರುಗಳು : ಅಮಾಲ್ಟಾಸ್ (ಹಿಂದಿ)
: ಕೊಂಡ್ರಾಯ್ (ತಮಿಳು)
: ಕಕ್ಕೆ (ಕನ್ನಡ)
ಹೂ ಬಿಡುವ ಕಾಲ : ಏಪ್ರಿಲ್– ಮೇ
ಹಣ್ಣುಗಳು ದೊರೆಯುವುದು : ಮೇ–ಜೂನ್

| |
|---|
| ಮರ |
| ಎಲೆಗಳು |
| ಹೂವುಗಳು |
| ಕಾಯಿ |
| ಒಣಗಿದ ಹಣ್ಣು |

ಈ ಚಿಕ್ಕ ಮತ್ತು ಮಧ್ಯಮ ಗಾತ್ರದ ಮರ ವಿರಳವಾದರೂ ವಿಶಾಲವಾದ ಆವರಣ ಹೊಂದಿದೆ. ಆಕರ್ಷಕ ಹಳದಿ ಬಣ್ಣಗಳಿಂದ ಕೂಡಿದ ಇದರ ಹೂಗಳು ಕೊಂಬೆಗಳ ಚೂಪಾದ ತುದಿಗಳಲ್ಲಿ ಗೊಂಚಲುಗಳಂತೆ ಕಾಣುತ್ತವೆ. ಇದರ ಹಣ್ಣುಗಳು ಉದ್ದವಾಗಿ ಸಿಲಿಂಡರ್ ಆಕಾರದಲ್ಲಿದ್ದು ಚಾಕೊಲೇಟ್ ಬಣ್ಣದಿಂದ ಕೂಡಿದೆ. ನೋಡಿದರೆ ತಿನ್ನಬೇಕು ಅನಿಸದಿದ್ದರೂ, ಕಾಡುಗಳಲ್ಲಿ ಈ ಪಾಡ್‌ಗಳನ್ನು ಕರಡಿ ಮತ್ತು ಮಂಗಗಳು ಬಹಳ ಇಷ್ಟಪಡುತ್ತವೆ.

ಜಾಲಾರಿ/ಸಾಲ್

ವೈಜ್ಞಾನಿಕ ಹೆಸರು :ಶೊರಿಯಾ ರೊಬಸ್ಟಾ (*Shorea robusta*)
ಅನ್ಯ ಹೆಸರುಗಳು :ಸಾಲ್ (ಹಿಂದಿ)
:ಅಶ್ವಕರ್ಣ (ಕನ್ನಡ)
ಹೂ ಬಿಡುವ ಕಾಲ :ಮಾರ್ಚ್–ಏಪ್ರಿಲ್
ಹಣ್ಣುಗಳು ದೊರೆಯುವುದು : ಜೂನ್–ಜುಲೈ

| |
|---|
| ಮರ |
| ಹೊಸ ಎಲೆ ಮತ್ತು ಮೊಗ್ಗುಗಳು |
| ಹಳೆಯ ಎಲೆ ಮತ್ತು ಹೂವುಗಳು |
| ತಿರುಗುವ ಹಣ್ಣು |

ಈ ಬೃಹತ್ತಾದ ವೃಕ್ಷ 40 ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಒಂದೇ ಒಂದು ಬೀಜ ಹೊಂದಿರುವ ಈ ಹಣ್ಣಿಗೆ 5 ರೆಕ್ಕೆಗಳಿವೆ. ಹಣ್ಣು ಕೆಳಗೆ ಬೀಳುವಾಗ ಈ ರೆಕ್ಕೆಗಳು ಅದು ತಿರುಗುವಂತೆ ಮಾಡುತ್ತದೆ. ಗಾಳಿ ಹೆಚ್ಚಾಗಿರುವ ದಿನಗಳಲ್ಲಿ, ಈ ಹಣ್ಣು ಮರದಿಂದ ಕಳಚಿ, ಸಣ್ಣ ಹೆಲಿಕಾಪ್ಟರ್‌ನಂತೆ ದೂರ ದೂರಕ್ಕೆ ಸಂಚರಿಸುತ್ತದೆ.

ಗೊಬ್ಬಳಿ/ಬಬೂಲ್

ವೈಜ್ಞಾನಿಕ ಹೆಸರು :ಅಕೇಶಿಯಾ ನೈಲೋಟಿಕಾ (*Acacia nilotica*)
ಅನ್ಯ ಹೆಸರುಗಳು :ಬಬೂಲ್ (ಹಿಂದಿ)
:ಕರುವೇಲಂ (ತಮಿಳು)
ಹೂ ಬಿಡುವ ಕಾಲ :ಮಳೆಗಾಲ / ಮಳೆ ಬಂದಾಗ
ಹಣ್ಣುಗಳು ದೊರೆಯುವುದು :ಏಪ್ರಿಲ್–ಜೂನ್

ಹೂವುಭರಿತ ಮರ
ಎಲೆ ಮತ್ತು ಮುಳ್ಳುಗಳು
ಹೂವುಗಳು
ಹಣ್ಣು

ಹಳ್ಳಿಗಳಲ್ಲಿ ಕೆರೆ–ಕುಂಟೆಗಳ ಸುತ್ತಮುತ್ತ ಈ ಮರಗಳು ಕಾಣಸಿಗುತ್ತವೆ. ಈ ಮರದ ಆವರಣ ವಿಸ್ತಾರವಾಗಿ, ದುಂಡನೆಯ ಆಕಾರದಲ್ಲಿದ್ದು ಎಲೆಗಳು ರೆಕ್ಕೆಗಳಂತೆ ಮುಚ್ಚಿಕೊಂಡಿವೆ. ಕಿರುಕೊಂಬೆಗಳ ಉದ್ದಕ್ಕೂ ನಿಮ್ಮ ಹೆಬ್ಬೆರಳಷ್ಟು ದೊಡ್ಡ ಗಾತ್ರದ ಜೋಡಿ ಮುಳ್ಳುಗಳನ್ನು ಕಾಣಬಹುದು. ನೂರಾರು ಚಿಕ್ಕ ಚಿಕ್ಕ ಹೂವುಗಳು ಗುಂಪಾಗಿ ಸೇರಿ ಹಳದಿ ಬಣ್ಣದ (ಪಾಮ್–ಪಾಮ್‌ನಂತಹ)
ದುಂಡನೆಯ ಹೂವಾಗುತ್ತದೆ ಎನ್ನುವುದು ನಿಮಗೆ ಗೊತ್ತೇ?

ತೇಗ/ಸಾಗುವಾನಿ/ಟೀಕ್

ವೈಜ್ಞಾನಿಕ ಹೆಸರು :ಟೆಕ್ಟೋನ ಗ್ರಾಂಡಿಸ್ (*Tectona grandis*)
ಅನ್ಯ ಹೆಸರುಗಳು :ಸಾಗೋನ್ (ಹಿಂದಿ)
:ತಯೆಕ್ಕು (ತಮಿಳು)
ಹೂ ಬಿಡುವ ಕಾಲ :ಜುಲೈ–ಆಗಸ್ಟ್
ಹಣ್ಣುಗಳು ದೊರೆಯುವುದು :ನವೆಂಬರ್–ಜನವರಿ

ಮರ
ಎಲೆ, ಹೂವು, ಹಣ್ಣುಗಳು
ಹೂವುಗಳ ಸಮೀಪ ನೋಟ
ಹಣ್ಣು
ತೇಗದ ಎಲೆಗಳನ್ನು ತಿಂದಿರುವ
ಎಲೆ ಉದುರಿಸುವ ಲಾರ್ವ

(leaf defoliator larvae)

ಇದು ಅತಿ ದೊಡ್ಡ ಎಲೆಗಳುಳ್ಳ ಎತ್ತರದ ಮರ. ಮರದ ಆವರಣ ಅಷ್ಟೊಂದು ಅಗಲವಾಗಿರದೆ ಉದ್ದವಾಗಿರುತ್ತದೆ. ಎಲೆಗಳು ಸುಮಾರು 60 ಸೆಂಟಿಮೀಟರ್‌ನಷ್ಟಿದ್ದು, ಉಪ್ಪು-ಕಾಗದವನ್ನು ಮುಟ್ಟಿದಂತೆ (sand paper) ಅನ್ನಿಸುತ್ತದೆ. ಎಳೆಯ ಎಲೆಗಳನ್ನು ಎಂದಾದರೂ ನಿಮ್ಮ ಕೈಗಳಿಂದ ಉಜ್ಜಿಕೊಂಡಿದ್ದೀರಾ? ಅದು ರಕ್ತವರ್ಣದ ಕಲೆಯನ್ನು ಉಳಿಸುತ್ತದೆ.

ಕಂಚುವಾಳ/ಬಸವನಪಾದ/ಪರ್ಪಲ್ ಬೊಹೀನಿಯಾ

ವೈಜ್ಞಾನಿಕ ಹೆಸರು :ಬೊಹಿನೀಯ ಪರ್ಪ್ಯೂರಿಯಾ (*Bauhinia purpurea*)
ಅನ್ಯ ಹೆಸರುಗಳು :ಕನಿಯಾರ್ (ಹಿಂದಿ)
:ನಿಲಟ್ಟಿರುವಟ್ಟಿ (ತಮಿಳು)
:ದೇವಕಂಚನ (ಕನ್ನಡ)
ಹೂ ಬಿಡುವ ಕಾಲ :ಅಕ್ಟೋಬರ್-ಜನವರಿ
ಹಣ್ಣುಗಳು ದೊರೆಯುವುದು :ಫೆಬ್ರವರಿ-ಏಪ್ರಿಲ್

ಮರ
ಎಲೆ ಮತ್ತು ಹೂವುಗಳು
ಹೂವುಗಳ ಸಮೀಪ ನೋಟ
ಕಾಯಿ
ಒಣಗಿದ ಹಣ್ಣು

ಇದು ಚಿಕ್ಕ/ಮಧ್ಯಮ ಗಾತ್ರದ ಮರ. ಸಮಾನವಾದ ಎರಡು ಹಾಲೆಗಳನ್ನು ಹೊಂದಿರುವ ಎಲೆಗಳು ಒಂದು ತುದಿಯಲ್ಲಿ ಅಂಟಿಕೊಂಡಿದ್ದು, ಇದು ಚಿಟ್ಟೆಯಂತೆ ಕಾಣುತ್ತದೆ. ಈ ಹೂವಿನ ಪಕಳೆಗಳು ಒಂದರ ಮೇಲೊಂದಿರದೆ ವಿನೂತನ ವಿನ್ಯಾಸದಿಂದ ಕೂಡಿದೆ. ಇದರ ಹಣ್ಣು ಉದ್ದನೆಯ ಪಾಡ್‌ನಂತಿದ್ದು, ಒಣಗಿದ ನಂತರ ಒಂದು ರೀತಿಯ ಶಬ್ಧದಿಂದ ಥಟ್ಟನೆ ಸಿಡಿಯುತ್ತದೆ.

ಸ್ವಾತಿ ಸಿಧು ರವರು ಸೀಸನ್ ವಾಚ್ ಎನ್ನುವ ಭಾರತದ ಪ್ರಕೃತಿ ಶಾಸ್ತ್ರದಲ್ಲಿ ನಿರತವಾಗಿರುವ ನಾಗರೀಕ ವಿಜ್ಞಾನ ಯೋಜನೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರನ್ನು swati@ncf-india.org ನಲ್ಲಿ ಸಂಪರ್ಕಿಸಬಹುದು.